CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೧೪, ೨೦೦೫ (ಚೈತ್ರ ೨೪, ಶಕ ವರ್ಷ ೧೯೨೭) | ಸಂಚಿಕೆ ೧೫ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್. ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಹಾಲಿ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :**
1. ಬೆಳಗಾವಿ ಜಿಲ್ಲಾಧಿಕಾರಿಯವರ ದಿನಾಂಕ: 5.3.2002ರ ಅ.ಸ.ಪತ್ರ ಸಂಖ್ಯೆ:ಕಂಶಾ/ ಸಿಬ್ಬಂದಿ:1:ವಿವ:251:01-02.
2. ದಿನಾಂಕ: 23.04.2004ರ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ:14:ಎಡಿಇ 2002.
3. ಶ್ರೀ ಆರ್. ಎ. ಪಾಟೀಲ ಇವರ ದಿನಾಂಕ: 5.5.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಆರ್. ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಹಾಲಿ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇವರು ರಾಯಭಾಗ ತಾಲ್ಲೂಕಿನ ತಹಶೀಲ್ದಾರ್‌ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬೆಳಗಾವಿ ಜಿಲ್ಲಾಧಿಕಾರಿಗಳು ನಡೆಸಿದ ಸದರಿ ಕಛೇರಿಯ ತಪಾಸಣೆ ವರದಿಯನ್ನು ಅನುಪಾಲನೆ ಮಾಡಲು ಸೂಚಿಸಿದ್ದು, ಸದರಿ ಅನುಪಾಲನಾ ವರದಿಯನ್ನು ಪರಿಶೀಲಿಸಲಾಗಿ, ರಾಯಭಾಗ ತಾಲ್ಲೂಕು ಕಛೇರಿಯಲ್ಲಿ ಸ್ವಚ್ಛತೆ ಕಾಪಾಡದಿರುವುದು, ಅಭಿಲೇಖಾಲಯದಲ್ಲಿ ಖಾಸಗಿ ವ್ಯಕ್ತಿಗಳಿಂದ ಮೂಲ ದಾಖಲೆಗಳ ಪ್ರತಿ ಮಾಡಿಸುವ ಕೆಲಸದಲ್ಲಿ ತೊಡಗಿಸಿದ್ದದು, ಮೇಲಾಧಿಕಾರಿಗಳಿಗೆ ಶಿಷ್ಟಾಚಾರ ನೀಡುವಲ್ಲಿ ವಿಫಲರಾಗಿರುತ್ತಾರೆಂಬ ಕಾರಣದಿಂದ ಸದರಿ ಜಿಲ್ಲಾಧಿಕಾರಿಯವರು ಈ ಬಗ್ಗೆ ಆರೋಪಿತ ಅಧಿಕಾರಿಯ ಇತರೆ 25 ಲೋಪದೋಷಗಳ ಬಗ್ಗೆ ದಿನಾಂಕ: 8.1.2002 ರಂದು ಕಾರಣ ಕೇಳುವ ನೋಟೀಸು ನೀಡಿದ್ದು, ಅದಕ್ಕೆ ಆಪಾದಿತ ಅಧಿಕಾರಿಯು ಸಲ್ಲಿಸಿದ್ದ ದಿನಾಂಕ: 23.1.2002ರ ಲಿಖಿತ ಹೇಳಿಕೆಯು ಸಮರ್ಪಕವಾಗಿರುವುದಿಲ್ಲವೆಂದು, ಅಲ್ಲದೆ ಈ ಆಪಾದಿತ ಅಧಿಕಾರಿಯು ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವಲ್ಲಿ ವಿಫಲರಾಗಿರುತ್ತಾರೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅ.ಸ.ಪತ್ರದಲ್ಲಿ ವರದಿ ಸಲ್ಲಿಸಿರುವ ಬೆಳಗಾವಿ ಜಿಲ್ಲಾಧಿಕಾರಿಗಳು ಶ್ರೀ ಆರ್. ಎ. ಪಾಟೀಲರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಸರಕಾರವನ್ನು ಕೋರಿರುತ್ತಾರೆ.

ಸದರಿ ಅಧಿಕಾರಿಯ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4 ರವರೆಗೆ) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಆರ್. ಎ. ಪಾಟೀಲರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗಳೆದಿರುತ್ತಾರೆ. ಆದುದರಿಂದ ಆರೋಪಿತ ಅಧಿಕಾರಿಯ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣಾ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 14 ಎಡಿಇ 2002, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರಕಾರವು ಶ್ರೀ ಎಂ. ಎನ್. ಗದಗ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಹೇಶ ನಿಲಯ, ನಾಯಕ ಚೌಲ್, ಪಿ.ಬಿ.ರಸ್ತೆ, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಶ್ರೀ ಆರ್.ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ, ಹಾಲಿ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಳಗಾವಿ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಳಗಾವಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ವಯ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್.432                    ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾ.ಕೋ) ಇವರಿಗೆ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಸಿಆಸುಇ 194 ಸಅರ 2004 ದಿನಾಂಕ: 14.07.2004, 17.08.2004 ಮತ್ತು 1.10.2004.
2. ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾ.ಕೋ) ಇವರ ರಜೆ ಅರ್ಜಿ ದಿನಾಂಕ: 21.10.2004, 11.11.2004, 10.12.2004. 1.1.2005.
3. ಕಾನೂನು ಕೋಶದ ಮುಖ್ಯಸ್ಥರು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆರ್‌ಡಿಪಿ ಎಸ್‌ಡಬ್ಲ್ಯೂ:ಡಬ್ಲ್ಯೂಸಿಡಿ:95 ಎಲ್‌ಸಿ 2004 ದಿನಾಂಕ: 8.2.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಅಧಿಸೂಚನೆಯಲ್ಲಿ ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾ.ಕೋ) ಇವರಿಗೆ ವೈದ್ಯಕೀಯ ಕಾರಣದ ಮೇಲೆ ಕಾನೂನು ಕೋಶದ ಮುಖ್ಯಸ್ಥರ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಇವರ ಶಿಫಾರಸ್ಸಿನ ಮೇರೆಗೆ ದಿನಾಂಕ: 19.6.2004 ರಿಂದ 30.9.2004 ರವರೆಗೆ ಒಟ್ಟು 104 ದಿನಗಳು ಸಂಯುಕ್ತ ರಜೆಯನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಮನವಿಗಳಲ್ಲಿ ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾ.ಕೋ) ಇವರು ನಿಗದಿತ ರಜೆ ಅರ್ಜಿಯನ್ನು ಸಲ್ಲಿಸಿ ವೈದ್ಯಕೀಯ ಕಾರಣದ ಮೇಲೆ ದಿನಾಂಕ: 11.10.2004 ರಿಂದ 31.12.2004 ರವರೆಗೆ ಒಟ್ಟು 82 ದಿನಗಳು ಗಳಿಕೆ ರಜೆಯನ್ನು ಮಂಜೂರು ಮಾಡುವಂತೆ ಕೋರಿರುವರು. ಆದರೆ ಇವರ ಮೇಲಧಿಕಾರಿಗಳಾದ ಕಾನೂನು ಕೋಶದ ಮುಖ್ಯಸ್ಥರು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಇವರು ಶ್ರೀಯುತರು ಸಲ್ಲಿಸಿರುವ ವೈದ್ಯಕೀಯ ದಾಖಲೆಗಳು ಸೂಕ್ತವಾಗಿರುವುದಿಲ್ಲವಾದುದರಿಂದ ಇವರ ಕೋರಲಾದ ರಜೆ ಅರ್ಜಿಯನ್ನು ನಾ ಮಂಜೂರು ಮಾಡಿ ಇವರ ವಿರುದ್ಧ ಇಲಾಖಾ ಕ್ರಮ ಜರುಗಿಸುವಂತೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆರ್‌ಡಿಪಿ ಎಸ್‌ಡಬ್ಲ್ಯೂ/ಡಬ್ಲ್ಯೂಸಿಡಿ/95/ಎಲ್‌ಸಿ/2004, ದಿನಾಂಕ: 8.2.2005 ರಲ್ಲಿ ತಿಳಿಸಿರುವರು.

ಶ್ರೀಯುತರು ಮೂಳೆ, ನರಗಳ ತೊಂದರೆ, ಮಧುಮೇಹ ಕಾಯಿಲೆಗಳಿಂದ ವೈದ್ಯಕೀಯ ಕಾರಣದ ಮೇಲೆ ದಿನಾಂಕ: 19.6.2004 ರಿಂದ 30.09.2004 ರವರೆಗೆ ರಜೆ ಹಾಕಿದ್ದು, ಕಾನೂನು ಕೋಶದ ಮುಖ್ಯಸ್ಥರ ಶಿಫಾರಸ್ಸಿನಂತೆ, ಈ ರಜೆಯನ್ನು ಮಂಜೂರು ಮಾಡಲಾಗಿದೆ. ಆದರೆ ನಂತರ ಇದೇ ಕಾಯಿಲೆಯ ಕಾರಣ ಮುಂದುವರೆದ ರಜೆ ಅವಧಿಗೆ ವೈದ್ಯಕೀಯ ದಾಖಲಾತಿಗಳು ಸೂಕ್ತವಾಗಿಲ್ಲವೆಂದು ತಿಳಿಸುತ್ತಾ, ರಜೆ ಮಂಜೂರು ಮಾಡಬಾರದಾಗಿ ಕೋರಿದ್ದಾರೆ. ಆದರೆ ಯಾವ ಕಾರಣಗಳಿಂದ ಸೂಕ್ತವಾಗಿಲ್ಲ ಎಂಬುದನ್ನು ಸ್ಪಷ್ಟ ಪಡಿಸಿರುವುದಿಲ್ಲ. ಇವರು ಮುಂಚಿನ ಅವಧಿಗೂ ಹಾಗೂ ಅನಂತರವೂ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರುವರು. ಆದ್ದರಿಂದ ಈ ವೈದ್ಯಕೀಯ ಪ್ರಮಾಣ ಪತ್ರಗಳನ್ನು ನಂಬದಿರಲು ಕಾರಣಗಳಿಲ್ಲ.

ಹಾಗೂ ಈ ಅಧಿಕಾರಿಯವರು ದಿನಾಂಕ: 1.1.2005 ರಿಂದ ಕರ್ತವ್ಯಕ್ಕೆ ಹಾಜರಾಗಿದ್ದು, ವೈದ್ಯಾಧಿಕಾರಿಯವರಿಂದ ದೇಹ ಅರ್ಹತಾ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಿರುವರು.

ಈ ಹಿನ್ನೆಲೆಯಲ್ಲಿ ಶ್ರೀ ಸಿ. ಚಂದ್ರಯ್ಯ, ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾ.ಕೋ) ಇವರಿಗೆ ದಿನಾಂಕ: 11.10.2004 ರಿಂದ 31.12.2004 ರವರೆಗೆ 82 ದಿನಗಳು ಗಳಿಕೆ ರಜೆಯನ್ನು ವೈದ್ಯಕೀಯ ಕಾರಣದ ಮೇಲೆ ಮಂಜೂರು ಮಾಡುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 334 ಸಅರ 2004, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಕಾ.ಕೋ)ಯ ಅಧೀನ ಕಾರ್ಯದರ್ಶಿ, ಸಿ. ಚಂದ್ರಯ್ಯ ಇವರಿಗೆ ವೈದ್ಯಕೀಯ ಕಾರಣದ ಮೇಲೆ ದಿನಾಂಕ: 11.10.2004 ರಿಂದ 31.12.2004 ರವರೆಗೆ (ಉ.ದಿ.ಸೇ) 82 ದಿನಗಳು ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ರಜೆಯು ಮುಗಿದ ನಂತರ ಅಧಿಕಾರಿಯವರನ್ನು ಅದೇ ಹುದ್ದೆಯಲ್ಲಿ ಮುಂದುವರೆಸಲಾಗಿದೆ. ಈ ರಜೆಯನ್ನು ಮಂಜೂರು ಮಾಡಿದ ನಂತರ ಖಾತೆಯಲ್ಲಿ 87 ದಿನಗಳು ಗಳಿಕೆ ರಜೆ ಜಮೆ ಇರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.388 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ, (ಸೇವೆಗಳು-2).

**ವಿಷಯ :** ಶ್ರೀಮತಿ ಸಿ. ಸರೋಜ, ಮತ್ತು ಶ್ರೀ ಎಚ್. ಎಸ್. ಗಣೇಶ ಮೂರ್ತಿ ಸರ್ಕಾರದ ಅಧೀನ ಕಾರ್ಯದರ್ಶಿಗಳು ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 32 ಎಸ್‌ಇಎನ್ 2002 ದಿನಾಂಕ: 22.03.2003.
2. ಶ್ರೀ ಜೆ. ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರು ಮತ್ತು ವಿಚಾರಣಾಧಿಕಾರಿಗಳು ಇವರ ವರದಿ ದಿನಾಂಕ: 31.10.2003.

**ಪ್ರಸ್ತಾವನೆ:**

ಶ್ರೀಮತಿ ಸಿ. ಸರೋಜ ಅಧೀನ ಕಾರ್ಯದರ್ಶಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಮತ್ತು ಶ್ರೀ ಎಚ್.ಎಸ್. ಗಣೇಶಮೂರ್ತಿ ಸರ್ಕಾರದ ಅಧೀನ ಕಾರ್ಯದರ್ಶಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರುಗಳು ಅನುಕ್ರಮವಾಗಿ 1997-98 ಮತ್ತು 1998-99ರ ಅವಧಿಗಳಲ್ಲಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯ ಪ್ರಭಾರ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ಮದ್ಯಪಾನದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಸಾರ್ವಜನಿಕರಿಗೆ ತಿಳುವಳಿಕೆ ನೀಡುವ ಭಿತ್ತಿಪತ್ರ ಹಾಗೂ ಕರಪತ್ರ ಇತ್ಯಾದಿ ಪ್ರಚಾರ ಸಾಮಗ್ರಿಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸಿಕೊಳ್ಳದೆ ಕೆ.ಎಸ್.ಐ.ಎಮ್.ಸಿ. ಸಂಸ್ಥೆಯ ಮೂಲಕ ಮುದ್ರಣ ಮಾಡಿಸಿಕೊಳ್ಳಲು ಆದೇಶ ಮಾಡಿ ಸರ್ಕಾರಕ್ಕೆ ಅನಾವಶ್ಯಕವಾಗಿ ರೂ. 13.27 ಲಕ್ಷ ನಷ್ಟ ಉಂಟು ಮಾಡಿದ್ದಾರೆಂಬ ಆರೋಪದ ಹಿನ್ನೆಲೆಯಲ್ಲಿ ಇವರುಗಳ ವಿರುದ್ಧ ವಿಚಾರಣೆಯನ್ನು ನಡೆಸಲು ಉಲ್ಲೇಖ (1)ರ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಶ್ರೀನಿವಾಸಮೂರ್ತಿರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ವಿಚಾರಣೆಯನ್ನು ಪೂರ್ತಿಗೊಳಿಸಿದ ವಿಚಾರಣಾಧಿಕಾರಿಗಳು ಉಲ್ಲೇಖ (2) ರಲ್ಲಿನ ವರದಿಯಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯ ಪ್ರಕಾರ ಆರೋಪಿತರ ವಿರುದ್ಧ ಮಾಡಲಾದ ಆರೋಪಗಳು ರುಜುವಾತಾಗಿದೆಯೆಂದು ವರದಿ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಆರೋಪಿತರಿಗೆ ವಿಚಾರಣಾ ವರದಿಯನ್ನು ಒದಗಿಸಿ ಅವರ ಹೇಳಿಕೆಯನ್ನು ಪಡೆಯಲಾಗಿದೆ. ಈ ಅಧಿಕಾರಿಗಳು ಅವರ ವಿವರಣೆಯಲ್ಲಿ ತಾವು ಯಾವುದೇ ದುರ್ನಡತೆಯನ್ನು ಎಸಗಿಲ್ಲವೆಂದು ಮೇಲ್ಕಂಡ ಬಾಬಿಗೆ ಹಂಚಿಕೆಯಾಗಿರುವ ಹಣಕ್ಕಿಂತ ಹೆಚ್ಚಿಗೆ ಖರ್ಚು ಮಾಡಲು ಹೇಗೆ ಸಾಧ್ಯವೆಂದು, ವಿಚಾರಣೆಗೆ ಒಳಪಡಿಸಿರುವ ಯಾವುದೇ ಸಾಕ್ಷಿಗಳು ಆಪಾದಿತರ ವಿರುದ್ಧ ಸಾಕ್ಷಿ ನುಡಿದಿಲ್ಲವೆಂದೂ, ಆಡಿಟ್ ವರದಿಯ ಮೇಲೆ ಇಲಾಖಾ ವಿಚಾರಣೆ ನಡೆಸುವಂತಿಲ್ಲವೆಂದೂ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಉತ್ತೇಜನ ನೀಡುವ ಬಗ್ಗೆ ಸರ್ಕಾರದಿಂದ ಕಾಲಕಾಲಕ್ಕೆ ನಿರ್ದೇಶನಗಳನ್ನು ನೀಡಲಾಗಿದೆಯೆಂದೂ, ಕೆ.ಎಸ್.ಐ.ಎಮ್.ಸಿ. ಸಂಸ್ಥೆಯು ಸಹ ಸರ್ಕಾರದ ಒಂದು ಸಣ್ಣ ಕೈಗಾರಿಕೆ ಸಂಸ್ಥೆಯಾಗಿದ್ದು ಸದರಿ ಸಂಸ್ಥೆಯಿಂದ ಮುದ್ರಣ ಮಾಡಿಸಿರುವುದು ಹೇಗೆ ನಿಯಮ ಬಾಹಿರವಾಗುತ್ತದೆಂದೂ ವಿವರಣೆ ನೀಡುತ್ತಾ ತಮ್ಮ ಮೇಲಿನ ಆರೋಪಗಳಿಂದ ಮುಕ್ತ ಮಾಡಲು ಮನವಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿ, ಆರೋಪಿತರ ವಿವರಣೆ ಮತ್ತು ಸಾಕ್ಷ್ಯಾಧಾರಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಆರೋಪಿತರು ಮಂಡಳಿಯ ವತಿಯಿಂದ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿ ಕೆ.ಎಸ್.ಐ.ಎಮ್.ಸಿ. ಸಂಸ್ಥೆ ಅಥವಾ ಎಂ.ಸಿ.ಎ. ವತಿಯಿಂದ ಮುದ್ರಣ ಕಾರ್ಯಕೈಗೊಳ್ಳಲು ಅನುಮತಿ ಪಡೆದಿರುತ್ತಾರೆ. ಈ ಎರಡೂ ಸಂಸ್ಥೆಗಳ ದರ ಪಟ್ಟಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ಲಾಭದಾಯಕವಾದ ಕೆ. ಎಸ್.ಐ.ಎಮ್.ಸಿ. ದರಪಟ್ಟಿಯನ್ನು ಅಂಗೀಕರಿಸಿರುತ್ತಾರೆ. ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಅಭಿಪ್ರಾಯವೂ ಸಹ ಆರೋಪಿತರಿಗೆ ಅನುಕೂಲವಾಗಿದೆ. ಆದ್ದರಿಂದ ಈ ಬಗ್ಗೆ ವಿಚಾರಣೆಯನ್ನು ಕೇವಲ ಆಡಿಟ್ ಆಕ್ಷೇಪಣೆ ಮೇಲೆ ಪ್ರಾರಂಭಿಸಿರುವುದು ಕಂಡು ಬರುತ್ತದೆ. ಈ ಎಲ್ಲಾ ಅಂಶಗಳನ್ನು ಮನಗಂಡು ಸರ್ಕಾರದ ಸ್ವಾಮ್ಯದಲ್ಲಿರುವ ನಿಗಮ ಮಂಡಳಿಗಳ ಮುದ್ರಣ ಕೆಲಸಗಳನ್ನು ಸರ್ಕಾರಿ ಮುದ್ರಾಣಾಲಯವು ವಹಿಸಿಕೊಳ್ಳದಿರುವ ಕಾರಣದಿಂದ ಮಂಡಳಿಯ ಮುದ್ರಣ ಕೆಲಸವನ್ನು ಸರ್ಕಾರಿ ಸ್ವಾಮ್ಯದ ಕೆ.ಎಸ್.ಐ.ಎಮ್.ಸಿ.ಗೆ ನೀಡಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 32 ಎಸ್‌ಇಎನ್ 2002 ಬೆಂಗಳೂರು ದಿನಾಂಕ: 9ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಸಿ. ಸರೋಜ ಮತ್ತು ಶ್ರೀ ಎಚ್. ಎಸ್. ಗಣೇಶಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಸಚಿವಾಲಯ ಸೇವೆ ಇವರುಗಳ ಮೇಲೆ ಆರೋಪಿಸಿದ ಆರೋಪಗಳಿಂದ ಅವರನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ. ಈ ವಿಚಾರಣೆಯು ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಆ ಎಲ್ಲಾ ಸೌಲಭ್ಯಗಳಿಗೆ ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್.389 ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಸಿಆಸುಇ, (ಸೇವೆಗಳು-3).

**ವಿಷಯ :** ಶ್ರೀ ಬಿ. ದಯಾನಂದ ಮುಖ್ಯ ಇಂಜಿನಿಯರ್‌ರವರ ಅಮಾನತ್ತಿನ ಅವಧಿಯನ್ನು ಕ್ರಮ ಬದ್ಧಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000 ದಿನಾಂಕ: 17.04.2000.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000 ದಿನಾಂಕ: 29.05.2000.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000 ದಿನಾಂಕ: 9.11.2004.

**ಪ್ರಸ್ತಾವನೆ:**

ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್‌ರವರು, ನೀರಾವರಿ ಇಲಾಖೆ (ದಕ್ಷಿಣ), ಮೈಸೂರು ರಲ್ಲಿ 1999-2000ನೇ ಸಾಲಿನಲ್ಲಿ ಮುಖ್ಯ ಇಂಜಿನಿಯರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರದಿಂದ, ಮೈಸೂರು ವಲಯಕ್ಕೆ ಬಿಡುಗಡೆಯಾದ ಹಣ ಭರವಸೆ ಪತ್ರದ ಮೊತ್ತ ರೂ.470-ಲಕ್ಷದ ಪೈಕಿ ಶೇಕಡ 3 ರಷ್ಟನ್ನು ಹಾರಂಗಿ ಯೋಜನೆಗೆ ಸರ್ಕಾರದ ಅನುಮತಿಯನ್ನು ಪಡೆಯದೆ ಬದಲಿಸಿದ ದುರ್ನಡತೆಗೆ ಸಂಬಂಧಿಸಿದಂತೆ, ಮೇಲೆ (1)ರಲ್ಲಿ ಓದಲಾದ ದಿನಾಂಕ: 17.04.2000ರ ಸರ್ಕಾರದ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಗಿತ್ತು. ತದನಂತರ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇರಿಸಿ, ಮೇಲೆ (2)ರಲ್ಲಿ ಓದಲಾದ ದಿನಾಂಕ: 29.5.2000ರ ಸರ್ಕಾರಿ ಆದೇಶದಲ್ಲಿ ಅಮಾನತ್ತನ್ನು ರದ್ದುಗೊಳಿಸಿ ಅವರನ್ನು ಸೇವೆಗೆ ತೆಗೆದುಕೊಳ್ಳಲಾಗಿರುತ್ತದೆ.

ಶ್ರೀಯುತ ಬಿ. ದಯಾನಂದ ರವರ ವಿರುದ್ಧ ನಡೆದ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳು ಆರೋಪಿತ ಅಧಿಕಾರಿಯು ಯಾವುದೇ ದುರುದ್ದೇಶದಿಂದ ನಿಯಮಗಳಿಗೆ ವಿರುದ್ಧವಾಗಿ ಕ್ರಮ ತೆಗೆದುಕೊಂಡಿಲ್ಲವೆಂದು, ಆಪಾದನೆಗಳು ರುಜುವಾತಾಗಿಲ್ಲವೆಂದು ವರದಿ ನೀಡಿದ್ದು, ಅದರಂತೆ ಮೇಲೆ (3)ರ ದಿನಾಂಕ: 9.11.2004ರ ಸರ್ಕಾರಿ ಆದೇಶದಲ್ಲಿ ಅವರನ್ನು ಆರೋಪ ಮುಕ್ತರನ್ನಾಗಿಸಿದೆ. ಆದ್ದರಿಂದ ಇವರ ಅಮಾನತ್ತಿನ ಅವಧಿಯನ್ನು ಹೇಗೆ ಪರಿಗಣಿಸಬೇಕೆಂಬ ಬಗ್ಗೆ ಕರ್ನಾಟಕ ಮಹಾಲೇಖಪಾಲರ ಪತ್ರವನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಎನ್.ಇ.ಎಸ್. 2005 ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್, ರವರು ಅಮಾನತ್ತಿನಲ್ಲಿ ಕಳೆದ ದಿನಾಂಕ: 17.04.2000 ರಿಂದ 29.05.2000 ರ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 100 (5)ರ ಪ್ರಕಾರ ಕರ್ತವ್ಯ ನಿರ್ವಹಿಸಿದ ಅವಧಿ (Duty period) ಎಂದು ಪರಿಗಣಿಸಿ ಆದೇಶಿಸಿದೆ.

ಶ್ರೀ ಬಿ. ದಯಾನಂದ, ರವರ ಮೇಲ್ಕಂಡ ಅವಧಿಯ ವೇತನವನ್ನು ಅವರು ಈಗಾಗಲೇ ಪಡೆದಿರುವ ಜೀವನಾಂಶ ಭತ್ಯೆಯೊಂದಿಗೆ ಹೊಂದಾಣಿಕೆಗೊಳಿಸಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್.390

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-3).

**ವಿಷಯ :** ಶ್ರೀ ಹೆಚ್. ಕೆ. ಗುಂಡೂರಾವ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ವೈ. ದೇವರಾಜು ಇವರ ವಿರುದ್ಧ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 77 ಎಸ್‌ಇಎನ್ 2002 ದಿನಾಂಕ: 19.11.2003.
2. ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವರದಿ ದಿನಾಂಕ: 28.07.04.

**ಪ್ರಸ್ತಾವನೆ:**

ಶ್ರೀ ಹೆಚ್. ಕೆ. ಗುಂಡೂರಾವ್, ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಹಾಗೂ ಶ್ರೀ ವೈ. ದೇವರಾಜು ಇವರು ಹಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀಮತಿ ಜಮೀಲ ಬೇಗಂ, ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ಅನಧಿಕೃತ ಗೈರು ಹಾಜರಿ ಸಂಬಂಧ ವಿಚಾರಣೆ ನಡೆಸಿದ ವಿಚಾರಣಾ ವರದಿ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ 17 ತಿಂಗಳು ವಿಳಂಬ ಮಾಡಿದ್ದರಿಂದ ಸದರಿ ಉಪನ್ಯಾಸಕರು ದಂಡನೆಯಿಂದ ತಪ್ಪಿಸಿಕೊಳ್ಳಲು ಪರೋಕ್ಷವಾಗಿ ಮೇಲ್ಕಂಡ ಅಧಿಕಾರಿಗಳೇ ಜವಾಬ್ದಾರರಾಗಿರುತ್ತಾರೆಂಬ ಆರೋಪದ ಮೇರೆಗೆ ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಆದೇಶದಲ್ಲಿ ಇವರ ವಿರುದ್ಧ ಹೊರಿಸಿದ ಆರೋಪಗಳ ಕುರಿತು ವಿಚಾರಣೆಯನ್ನು ನಡೆಸಲು ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆಯನ್ನು ಕೈಗೊಂಡ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಪೂರ್ತಿಗೊಳಿಸಿ ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಅವರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಮೊದಲನೇ ಆರೋಪಿತ ಶ್ರೀ ಹೆಚ್. ಕೆ. ಗುಂಡೂರಾವ್, ಸರ್ಕಾರದ ಅಧೀನ ಕಾರ್ಯದರ್ಶಿ ಅವರು ಶಿಕ್ಷಣ ಇಲಾಖೆಯಿಂದ ವರ್ಗಾವಣೆಯಾಗಿ ಅವರ ಸ್ಥಾನಕ್ಕೆ ಶ್ರೀ ಬಸವರಾಜು ಅವರು ನೇಮಕಗೊಂಡಿರುವುದರ ಮೇರೆಗೆ ಶ್ರೀ ಬಸವರಾಜು ರವರು ಆರೋಪಿತರ ಅಲಮೇರುವಿನಲ್ಲಿದ್ದ ಕೆಲವು ಕಾಗದ ಪತ್ರಗಳನ್ನು ಮತ್ತು ಕಡತಗಳನ್ನು ಎರಡನೇ ಆರೋಪಿತರಾದ ಶ್ರೀ ವೈ. ದೇವರಾಜುರವರಿಗೆ ನೀಡಿರುತ್ತಾರೆಂದು ತಿಳಿದುಬರುತ್ತದೆ. ಈ ರೀತಿ ವಿಷಯ ನಿರ್ವಾಹಕರಿಗೆ ನೀಡಿದ ಕಾಗದಪತ್ರಗಳು ಮತ್ತು ಕಡತಗಳ ಪೈಕಿ ಶ್ರೀಮತಿ ಜಮೀಲ ಬೇಗಂರವರ ವಿಚಾರಣೆಗೆ ಸಂಬಂಧಿಸಿದ ಕಡತವು ಸಹ ಇದ್ದಿತೆಂದು ಇದನ್ನು ಎರಡನೇ ಆರೋಪಿತರು, ಒಂದನೇ ಆರೋಪಿತ ಅಧಿಕಾರಿಗೆ ಮುಂದಿನ ಕ್ರಮಕ್ಕಾಗಿ ಬಹಳ ಹಿಂದೆಯೇ ಸಲ್ಲಿಸಿದ್ದರೆಂದು ವಾದಿಸಲಾಗಿರುತ್ತದೆ. ಈ ಬಗ್ಗೆ ಸಾಕ್ಷಿ ನುಡಿದ ಶ್ರೀ ಬಸವರಾಜುರವರು ಅಲಮೇರಾದಲ್ಲಿದ್ದ ಕಾಗದ ಪತ್ರ ಮತ್ತು ಕಡತಗಳನ್ನು ವಿಲೇ ಮಾಡಲು ಎರಡನೇ ಆರೋಪಿತರಿಗೆ ನೀಡಿರುವುದನ್ನು ಒಪ್ಪಿಕೊಂಡಿರುತ್ತಾರೆ. ಆದರೆ ಯಾವ ಯಾವ ಕಾಗದ ಪತ್ರಗಳು ಮತ್ತು ಕಡತಗಳು ಇದ್ದವು ಎಂಬುದನ್ನು ಪಟ್ಟಿ ಮಾಡಿಕೊಡಲಿಲ್ಲವೆಂದು ನುಡಿದಿರುತ್ತಾರೆ. ಆದರೆ ಈ ಕಡತದ ಚಲನವಲನದ ಬಗ್ಗೆ ಎರಡನೇ ಆರೋಪಿತರಾದ ಶ್ರೀ ವೈ. ದೇವರಾಜುರವರ ದಿನಚರಿ ಪುಸ್ತಕದಲ್ಲಿ ಸೂಕ್ತ ನಮೂದುಗಳು ಇಲ್ಲದೇ ಇರುವುದನ್ನು ಗಣನೆಗೆ ತೆಗೆದುಕೊಂಡು ಒಂದನೇ ಆರೋಪಿತರಾದ ಶ್ರೀ ಗುಂಡೂರಾವ್‌ರವರ ಅಲಮೇರಾದಲ್ಲಿ ಇದ್ದಿರಬಹುದು ಎಂಬುದಕ್ಕೆ ಸಾಕ್ಷ್ಯಾಧಾರಗಳು ಲಭ್ಯವಿಲ್ಲದೇ ಇದ್ದುದರಿಂದ ಒಂದನೇ ಆರೋಪಿತರಾದ ಶ್ರೀ ಗುಂಡೂರಾವ್‌ರವರ ಮೇಲೆ ಹೊರಿಸಿದ ಆರೋಪವು ಸಾಬೀತಾಗಿಲ್ಲವೆಂದೂ, ಎರಡನೇ ಆರೋಪಿತರಾದ ಶ್ರೀ ವೈ. ದೇವರಾಜು ರವರ ಮೇಲೆ ಹೊರಿಸಿದ ಆರೋಪವು ಸಾಬೀತಾಗಿದೆಯೆಂದು ವರದಿ ನೀಡಿರುತ್ತಾರೆ.

ಈ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಒಂದನೇ ಆರೋಪಿತರಾದ ಶ್ರೀ ಗುಂಡೂರಾವ್‌ರವರು ಕಾಲಕಾಲಕ್ಕೆ ತಪಾಸಣೆ ಕೈಗೊಂಡಿದ್ದರೆ ಮತ್ತು ಅತಿ ಮುಖ್ಯ ಸ್ವೀಕೃತಿಗಳ ಹಾಗೂ ಕಡತಗಳ ಮೇಲೆ ವಿಶೇಷ ನಿಗಾ ಇಟ್ಟಿದ್ದಲ್ಲಿ ಇಂತಹ ಘಟನೆಯನ್ನು ತಪ್ಪಿಸಬಹುದಾಗಿತ್ತೆಂದು ಹಾಗೂ ಎರಡನೇ ಆರೋಪಿತರಾದ ಶ್ರೀ ವೈ. ದೇವರಾಜುರವರು ಅವರ ಕರ್ತವ್ಯ ನಿರ್ಲಕ್ಷ್ಯತೆಯಿಂದ ವಿಳಂಬ ಮಾಡಿರುವುದನ್ನು ಸಹ ಮನಗಂಡು ಇಬ್ಬರೂ ಆರೋಪಿತ ಅಧಿಕಾರಿಗಳ ಮೇಲಿನ ಆರೋಪಗಳು ಸಮರ್ಥನೀಯವೆಂದು ಪರಿಗಣಿಸಿ ವಿಚಾರಣಾ ವರದಿಯನ್ನು ಏಕೆ ತಿರಸ್ಕರಿಸಬಾರದು ಎಂದು ಮೊದಲನೇ ಆರೋಪಿತರಿಗೆ ಮತ್ತು ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪಿಕೊಂಡು ಎರಡನೇ ಆರೋಪಿತರಾದ ಶ್ರೀ ವೈ. ದೇವರಾಜುರವರ ವಿರುದ್ಧ ಮುಂದಿನ ಕ್ರಮ ಏಕೆ ತೆಗೆದುಕೊಳ್ಳಬಾರದು ಎಂಬುದಕ್ಕೆ ನೋಟೀಸ್ ಜಾರಿ ಮಾಡಲಾಗಿತ್ತು.

ಇವರುಗಳಿಗೆ ನೀಡಿದ ನೋಟೀಸಿಗೆ ವಿವರಣೆ ನೀಡುತ್ತಾ ಶ್ರೀ ಗುಂಡೂರಾವ್ ರವರು ಕಾಲಕಾಲಕ್ಕೆ ತಪಾಸಣೆ ಮಾಡಿರುತ್ತಾರೆಂದೂ, ಆ ಬಗ್ಗೆ ದೋಷಾರೋಪಣೆಗಳಲ್ಲಿ ಯಾವುದೇ ಆರೋಪ ಮಾಡಿಲ್ಲವೆಂದು ಮತ್ತು ಪ್ರಶ್ನಿತ ಕಡತವನ್ನು ಅವರ ಉತ್ತರಾಧಿಕಾರಿ ಎರಡನೇ ಆರೋಪಿತರಿಗೆ ನೀಡಿರುವುದಕ್ಕೆ ಸಾಕ್ಷ್ಯಾಧಾರಗಳು ಇಲ್ಲವೆಂದು ತಿಳಿಸುತ್ತಾ ಅವರ ಮೇಲಿನ ಆರೋಪಗಳು ನಿರಾಧಾರವೆಂದು ಮನವಿ ಮಾಡುತ್ತಾ ಅವರನ್ನು ದೋಷಮುಕ್ತರನ್ನಾಗಿ ಪರಿಗಣಿಸಲು ಕೋರಿದ್ದಾರೆ. ಅದೇ ರೀತಿ ಎರಡನೇ ಆರೋಪಿತರಾದ ಶ್ರೀ ವೈ. ದೇವರಾಜುರವರು ಅವರ ವಿವರಣೆಯನ್ನು ಸಲ್ಲಿಸುತ್ತಾ ಪ್ರಶ್ನಿತ ಕಡತವನ್ನು ಒಂದನೇ ಆರೋಪಿತರಿಗೆ ಸಲ್ಲಿಸಿದ ನಂತರ ತಮಗೆ ಮತ್ತೆ ಆ ಕಡತವು ವಾಪಾಸು ಬರಲಿಲ್ಲವೆಂದು ಇದಕ್ಕೆ ಕಡತ ಚಲನವಲನ ಪುಸ್ತಕವನ್ನು ಸಾಕ್ಷ್ಯಾಧಾರವನ್ನಾಗಿ ಪರಿಗಣಿಸಬೇಕೆಂದು ಹಾಗೂ ಸದರಿ ಕಡತವು ಪತ್ತೆಯಾದಾಗ ಮತ್ತೆ ಅದರ ಮೇಲೆ ಟಿಪ್ಪಣಿ ಬರೆದು ಮಂಡಿಸಿರುತ್ತೇನೆಂದು ಅವರಿಂದ ಯಾವುದೇ ದುರ್ನಡತೆ ನಡೆದಿಲ್ಲವೆಂದೂ ಮನವಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಪ್ರಧಾನ ಸಾಕ್ಷಿ ಶ್ರೀ ಬಸವರಾಜುರವರ ಹೇಳಿಕೆಯನ್ನು ಆರೋಪಿತರು ಸಲ್ಲಿಸಿರುವ ವಿವರಣೆ ಹಾಗೂ ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿದ ಸರ್ಕಾರವು ಎರಡನೇ ಆರೋಪಿತರಿಗೆ ಪ್ರಶ್ನಿತ ಕಡತವನ್ನು ಶ್ರೀ ಬಸವರಾಜುರವರು ನೀಡಿರುವುದಕ್ಕೆ ಸಾಕ್ಷ್ಯಾಧಾರಗಳು ಇಲ್ಲದಿರುವುದು ಸ್ಪಷ್ಟಪಡುವುದರಿಂದಲೂ ಹಾಗೂ ಮೊದಲನೇ ಆರೋಪಿತರಾದ ಶ್ರೀ ಗುಂಡೂರಾವ್‌ರವರು ಕಡತವನ್ನು ಅವರು ವರ್ಗಾವಣೆಯಾಗುವ ತನಕ ಅವರ ಬಳಿಯೇ ಇಟ್ಟುಕೊಂಡಿರುತ್ತಾರೆ ಎಂಬುದಕ್ಕೆ ಯಾವುದೇ ಸಮರ್ಥನೀಯ ಪುರಾವೆ ಇಲ್ಲದಿದ್ದರೂ ಮುಖ್ಯವಾದ ಕಡತಗಳನ್ನು ಮಂಡಿಸಿದ ನಂತರ ಅದರ ಮುಂದಿನ ಬೆಳವಣಿಗೆಯನ್ನು ತಿಳಿದುಕೊಳ್ಳಲು ಆಸಕ್ತಿ ವಹಿಸದೇ ನಿರ್ಲಕ್ಷಿಸಿರುವುದು ಗೋಚರವಾಗುತ್ತದೆ. ಆದ್ದರಿಂದ ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 77 ಎಸ್‌ಇಎನ್ 2002 ಬೆಂಗಳೂರು ದಿನಾಂಕ: 9ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಹೆಚ್. ಕೆ. ಗುಂಡೂರಾವ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ವೈ. ದೇವರಾಜು, ಹಿರಿಯ ಸಹಾಯಕ ಇವರುಗಳ ಮೇಲೆ ಹೊರಿಸಿದ ಆರೋಪಗಳಿಂದ ಅವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ. ಆದಾಗ್ಯೂ ಇವರುಗಳು ಅತಿ ಮುಖ್ಯವಾದ ಕಡತಗಳ ಬಗ್ಗೆ ಪ್ರಗತಿಯನ್ನು ತಿಳಿದುಕೊಳ್ಳುವ ಆಸಕ್ತಿ ತೋರಿಸದೇ ನಿರ್ಲಕ್ಷಿಸಿರುವುದಕ್ಕೆ ಇವರುಗಳಿಗೆ ತೀವ್ರ ಎಚ್ಚರಿಕೆಯನ್ನು ನೀಡಲಾಗಿದೆ. ಈ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಆ ಸೌಲಭ್ಯಗಳಿಗೆ ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್.391

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಸಿಆಸುಇ (ಸೇವೆಗಳು-3).

## EDUCATION SECRETARIAT

**Sub :** Release of funds for completion of P.U. Directorate Building Construction.

**Read :** 1. Letter No. ಪಪೂಶಿಇ/ಕಟ್ಟಡ ನಿರ್ಮಾಣ/2004-05, dated: 7.12.2004, from the Director, Pre-University Education.

**Preamble:**

Director, Pre-University Education, vide his letter dated: 7.12.2004, read above, has reported that the P.U. Directorate at present is situated at the building belonging to Technical Education Department and there is heavy pressure to vacate the same. Building for the P.U.E. Directorate began eleven years ago in the land by the side of CET at Malleswaram and remains in completed due to non release of funds by Government. Speedy completion of the Directorate building will not only smoothen the administrative work but also the work of C.E.T. The Director, therefore has requested for early release of funds for speedy completion of Directorate building. The Government has considered the same and orders as follows.

**Govt. Order No. ED 158 YOSAKA 2005, Bangalore, dated: 22nd March 2005**

Government is pleased to release Rs.1.13 crores (Rupees One crore and thirteen lakhs only) out of contingency fund for completion of pre University Education Directorate Building out of contingency fund. The amount so released will be met first out of the Contigency Fund under the Head of Account "8000-00-225-0-00-General Education" later tobe recouped from the Head of Account "4202-01-202-1-01-139 (Plan)" through supplementary estimates. The Finance Department will issue a separate order releasing the said amount from the Contigency fund without which no fund can be drawn under this G.O. The Drawing Officer will present bill drawing money from the contingency fund. The Treasury will release funds only when the Finance Department's separate sanction order is also enclosed to this G.O.

This order issues with the concurrence of Finance Department vide their U.O. Note No. FD 440 Exp-8/2005 dated: 22.3.2005.

By Order and in the Name of the Governor of Karnataka,

PR-428

**K. SRIKANTESHWARA**

Special Officer and Ex-officio

Deputy Secretary (Planning),

Education Department.

**ಶಿಕ್ಷಣ ಸಚಿವಾಲಯ**

**ಸುತ್ತೋಲೆ**

**ಕ್ರಮ ಸಂಖ್ಯೆ: ಇಡಿ 122 ಯುಎನ್‌ಇ 2002 ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2005**

**ವಿಷಯ :** ವಿಶ್ವವಿದ್ಯಾಲಯಗಳಲ್ಲಿ ಸೇವಾ ನಿರತರಾದ ಸರ್ಕಾರಿ ನೌಕರರು/ಅಧಿಕಾರಿಗಳನ್ನು ವಿದೇಶಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ :** 1. ದಿನಾಂಕ: 5.10.2001 ಸಂಖ್ಯೆ: ಇಡಿ 172 ಯುಆರ್‌ಸಿ 2001ರ ಸರ್ಕಾರಿ ಸುತ್ತೋಲೆ.
2. ದಿನಾಂಕ: 18.01.2003ರ 40ನೇ ಅಂತರ ವಿಶ್ವವಿದ್ಯಾಲಯ ಮಂಡಳಿಯ ಸಭೆಯ ನಡವಳಿ.

ದಿನಾಂಕ: 5.10.2001 ಸಂಖ್ಯೆ: ಇಡಿ 172 ಯುಆರ್‌ಸಿ 2001ರ ಸರ್ಕಾರಿ ಸುತ್ತೋಲೆಯಲ್ಲಿ ವಿಧಿಸಲಾಗಿರುವ ಮಾರ್ಗ ಸೂಚಿಗಳ ಪ್ರಕಾರ ವಿಶ್ವವಿದ್ಯಾಲಯದ ನೌಕರರುಗಳನ್ನು ಉನ್ನತ ವ್ಯಾಸಂಗ, ಸೆಮಿನಾರ್, ಸಮ್ಮೇಳನಗಳು ಅಥವಾ ಕಾರ್ಯಗಾರಗಳಿಗೆ ಅಥವಾ ಇನ್ನಿತರೆ ನಿಯಮಿತ ಕಾರ್ಯಗಳ ಮೇಲೆ ವಿದೇಶಕ್ಕೆ ನಿಯೋಜಿಸುವ ಸಂದರ್ಭದಲ್ಲಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯಬೇಕೆಂದು ನಿರ್ದಿಷ್ಟ ಸೂಚನೆಗಳನ್ನು ನೀಡಲಾಗಿತ್ತು.

ಧನಸಹಾಯ ಆಯೋಗ ವಿದೇಶಿ ಸಂಸ್ಥೆಗಳ ಆರ್ಥಿಕ ನೆರವಿನೊಂದಿಗೆ, ವಿದೇಶದಲ್ಲಿ ನಡೆಯಲಿರುವ ಸೆಮಿನಾರ್‌ಗಳಿಗೆ ಹಾಜರಾಗುವುದಕ್ಕೆ ವಿಶ್ವವಿದ್ಯಾಲಯಗಳ ಉಪನ್ಯಾಸಕರುಗಳನ್ನು ಆಹ್ವಾನಿಸಿದ್ದರೂ ಸಹ, ವಿದೇಶ ಪ್ರಯಾಣಕ್ಕಾಗಿ ಸರ್ಕಾರದ ಅನುಮೋದನೆ ನೀಡುವಲ್ಲಿ ಅನುಸರಿಸಬೇಕಾಗುವ ನೀತಿಯಿಂದ ವಿಳಂಬವಾಗುತ್ತಿದ್ದು, ವಿದೇಶ ಪ್ರಯಾಣ ಮಾಡುವುದಕ್ಕೆ ಅವಕಾಶವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಈ ವಿಷಯವನ್ನು ಸರ್ಕಾರವು ಪುನರ್ ಪರಿಶೀಲನೆ ಮಾಡಲಾಗಿದೆ.

ದಿನಾಂಕ: 18.01.2003 ರಂದು ಜರುಗಿದ 40ನೇ ಅಂತರ ವಿಶ್ವವಿದ್ಯಾಲಯ ಮಂಡಳಿ ಸಭೆಯ ವಿಷಯ ಸಂಖ್ಯೆ: 13ರ ನಿರ್ಣಯದಂತೆ ಯುಜಿಸಿ ನೆರವಿನಿಂದ ಮತ್ತು ವಿದೇಶಿ ಸಂಸ್ಥೆಗಳ ಆರ್ಥಿಕ ನೆರವಿನೊಂದಿಗೆ ವಿದೇಶ ಪ್ರವಾಸ ಕೈಗೊಳ್ಳಲು ಸರ್ಕಾರದ ಪೂರ್ವಾನುಮತಿ ಪಡೆಯಬೇಕೆಂಬುದನ್ನು ಹಿಂತೆಗೆದುಕೊಂಡು ಈ ವಿಷಯಗಳನ್ನು ನಿರ್ಧರಿಸಲು ಕುಲಪತಿಗಳು ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳಿಗೆ ಅಧಿಕಾರ ನೀಡಲು ತೀರ್ಮಾನಿಸಲಾಗಿತ್ತು.

ಈ ಹಿನ್ನೆಲೆಯಲ್ಲಿ, ದಿನಾಂಕ: 5.10.2001 ಸಂಖ್ಯೆ: ಇಡಿ 172 ಯುಆರ್‌ಸಿ 2001ರ ಸರ್ಕಾರಿ ಸುತ್ತೋಲೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ.

ಇದನ್ನು ದಿನಾಂಕ: 26.11.2004 ಸಂಖ್ಯೆ: ಆಇ:5484/ಎಫ್/2004ರ ಆರ್ಥಿಕ ಇಲಾಖೆಯ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**ಸುಂದರ ರಾಜಗುಪ್ತ**
ಪಿ.ಆರ್.429 ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ(ವಿಶ್ವವಿದ್ಯಾಲಯ).

## ತಿದ್ದುಪಡಿ ಆದೇಶ

## ಸಂಖ್ಯೆ: ಇಡಿ 152 ಯೋಯೋಕಾ 2004 ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2005

**ವಿಷಯ :** ಶಿಕ್ಷಣ ಇಲಾಖೆಯಿಂದ ಸಮಾಜ ಕಲ್ಯಾಣ ಇಲಾಖೆಯ ಅಧೀನಕ್ಕೊಳಪಡುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘಕ್ಕೆ ವರ್ಗಾಯಿಸಲ್ಪಟ್ಟಿರುವ ವಸತಿ ಶಾಲೆಗಳಿಗೆ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

ಸರ್ಕಾರಿ ಆದೇಶ ಸಂಖ್ಯೆ: ಇಡಿ 152 ಯೋಯೋಕಾ 2004, ಬೆಂಗಳೂರು ದಿನಾಂಕ: 10.3.2005 (ಇಡಿ 124 ಸ್ಕೀಮರ (ಯೂನಿಕ್) 2005, ದಿನಾಂಕ: 10.3.2005ರ ಆದೇಶದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘಕ್ಕೆ ವರ್ಗಾಯಿಸಲ್ಪಟ್ಟಿರುವ ವಸತಿ ಶಾಲೆಗಳಿಗೆ ಮೂರನೆ ಕಂತಿನ ಅನುದಾನವಾಗಿ ಒಟ್ಟು ರೂ.185.04 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಇದರಲ್ಲಿ ಲೆಕ್ಕ ಶೀರ್ಷಿಕೆ 2202-01-800-9-01-101 (ಯೋಜನೇತರ) ರಲ್ಲಿ ರೂ. 18.17 ಲಕ್ಷಗಳಿಗೆ ಬದಲಾಗಿ, ಲೆಕ್ಕ ಶೀರ್ಷಿಕೆ 2202-02-800-9-01-101 (ಯೋಜನೇತರ) ರಡಿ ರೂ.18.17 ಲಕ್ಷಗಳೆಂದು ಓದಿಕೊಳ್ಳತಕ್ಕದ್ದು, ಇನ್ನುಳಿದ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ಪಿ.ಆರ್.430 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ(ಯೋಜನೆ), ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಾಗೇಪಲ್ಲಿ ವೀರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಹಾಗೂ ಶ್ರೀ ಎ. ಎ. ಇಳಕಲ್, ಕೆಎಎಸ್ ಅಧಿಕಾರಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಎಸ್‌ಇಎನ್ 2001 ದಿನಾಂಕ: 31.1.2004.
2. ಶ್ರೀ ಎಂ. ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರ ವಿಚಾರಣಾ ವರದಿ ದಿನಾಂಕ: 18.11.2004.

**ಪ್ರಸ್ತಾವನೆ:**

ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಧಾರವಾಡದಲ್ಲಿ ವಿಶೇಷ ಭೂಸ್ವಾಧೀನ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ರಾಜ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಗ್ರಾಸಿಮ್ ಇಂಡಸ್ಟ್ರೀಸ್, ಕುಮಾರಪಟ್ಟಣಂ ಅವರಿಗೆ ಸೊಲೇಸಿಯಂ ನೀಡಿದ್ದಾಗ್ಯೂ ಸಹ ಇದೆ ಪ್ರಕರಣದಲ್ಲಿ ಗ್ರಾಸಿಮ್ ಇಂಡಸ್ಟ್ರೀಸ್‌ನವರು ಸಲ್ಲಿಸಿದ ಮೇಲ್ಮನವಿಯನ್ನು ವಜಾ ಮಾಡಿರುವ ವಿಷಯವನ್ನು ಸರ್ಕಾರಿ ವಕೀಲರ ಮೂಲಕ ರಾಜ್ಯ ಉಚ್ಚ ನ್ಯಾಯಾಲಯದ ಗಮನಕ್ಕೆ ತರಲು ನ್ಯಾಯಾಲಯದ ತೀವ್ರ ಆಕ್ಷೇಪಣೆಗೆ ಗುರಿಯಾಗುವ ಸಂದರ್ಭ ಸೃಷ್ಟಿಸಿದ ಆರೋಪಕ್ಕಾಗಿ ಶ್ರೀ ಬಾಗೇಪಲ್ಲಿ ವೀರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಹಾಗೂ ಶ್ರೀ ಎ. ಎ. ಇಳಕಲ್, ಕೆಎಎಸ್ ಅಧಿಕಾರಿ ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 31.1.2004ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎಂ. ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ: 18.11.2004 ರಂದು ವಿಚಾರಣಾ ವರದಿಯನ್ನು ಸಲ್ಲಿಸಿ ಮೆ: ಗ್ರಾಸಿಮ್ ಇಂಡಸ್ಟ್ರೀಸ್, ಕುಮಾರಪಟ್ಟಣಂ ಇವರಿಗೆ ಭೂಸ್ವಾಧೀನ ಪಡಿಸಿಕೊಂಡ ಜಮೀನಿಗೆ ಪರಿಹಾರಧನ ವಿತರಿಸುವ ವಿಷಯದಲ್ಲಿ ರಾಜ್ಯ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸುವಲ್ಲಿ ವಿಳಂಬ ಮಾಡಿರುವ ದುರ್ನಡತೆ ಆಧಾರದ ಮೇಲೆ ವಿಚಾರಣೆ ನಡೆದು ಉಚ್ಚ ನ್ಯಾಯಾಲಯಕ್ಕೆ ಮಾಹಿತಿ ನೀಡುವಲ್ಲಿ ಯಾವುದೇ ಲೋಪವೆಸಗಿಲ್ಲವೆಂದು ಹಾಗೂ ಸರ್ಕಾರಿ ವಕೀಲರಿಗೆ ಈ ಪ್ರಕರಣ

ಕುರಿತು ಪೂರ್ಣ ಮಾಹಿತಿಯನ್ನು ಒದಗಿಸಿರುತ್ತಾರೆಂದು ಸಾಕ್ಷ್ಯಾಧಾರಗಳ ಮೂಲಕ ತಿಳಿಸಿರುತ್ತಾರೆ. ಹಾಗೂ ಸರ್ಕಾರಿ ವಕೀಲರುಗಳನ್ನು ಸಹ ಭೇಟಿ ಮಾಡಿ ಈ ಪ್ರಕರಣದ ವಿವರಗಳನ್ನು ಒದಗಿಸಿರುವುದರಿಂದ ಆಪಾದಿತ ಅಧಿಕಾರಿಗಳ ವಿರುದ್ಧ ಮಾಡಲಾದ ಆರೋಪಗಳು ರುಜುವಾತಾಗಿ ರುವುದಿಲ್ಲವೆಂಬ ನಿರ್ಣಯವನ್ನು ನೀಡಿರುತ್ತಾರೆ.

ಆದ್ದರಿಂದ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದಿರಲು ಯಾವುದೇ ಸಮಂಜಸವಾದ ಕಾರಣಗಳು ಇರುವುದಿಲ್ಲವಾದ್ದರಿಂದ ವಿಚಾರಣಾಧಿಕಾರಿಯವರ ಅಭಿಪ್ರಾಯವನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಎಸ್‌ಇಎನ್ 2001 ದಿನಾಂಕ: 18ನೇ ಮಾರ್ಚ್ 2005**

ಮೇಲೆ ವಿವರಿಸಿರುವ ಸಂದರ್ಭಗಳಿಂದಾಗಿ ಶ್ರೀ ಬಾಗೇಪಲ್ಲಿ ವೀರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಹಾಗೂ ಶ್ರೀ ಎ. ಎ. ಇಳಕಲ್, ಕೆಎಎಸ್ ಅಧಿಕಾರಿ ಅವರುಗಳನ್ನು 1.10.2003ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್.433

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಶಿಫಾರಸ್ಸು ಮಾಡಲು ತಜ್ಞರ ಸಮಿತಿ ರಚಿಸಿರುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಜಸಂಇ 12 ಸಿಎಎಂ 2005, ದಿನಾಂಕ: 21.02.2005.
2. ಶ್ರೀ ಎಸ್. ಟಿ. ಪಾಟೀಲ, ನಿರ್ದೇಶಕರು, ವಾಲ್ಮಿ, ಧಾರವಾಡ ಹಾಗೂ ಸದಸ್ಯ ಕಾರ್ಯದರ್ಶಿ, ತಜ್ಞರ ಸಮಿತಿ ಇವರ ಪತ್ರಸಂಖ್ಯೆ: ವಾಲ್ಮಿ:04-05/818, ದಿನಾಂಕ: 7.3.2005.

**ಪ್ರಸ್ತಾವನೆ:**

ದಿನಾಂಕ: 18.1.2005 ರಂದು ಮಾನ್ಯ ಜಲ ಸಂಪನ್ಮೂಲ ಹಾಗೂ ಸಾರಿಗೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಪರಿಶೀಲನಾ ಸಭೆಯಲ್ಲಿ ನೀರು ನಿರ್ವಹಣೆಯಲ್ಲಿ ರೈತರ ಪಾಲ್ಗೊಳ್ಳುವಿಕೆಯು ಪರಿಣಾಮಕಾರಿಯಾಗಲು ಹಾಗೂ ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ, ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಹಾಗೂ ಸರ್ಕಾರವು ಕೈಗೊಳ್ಳಬೇಕಾದ ನೀತಿಗಳ ಬಗ್ಗೆ ಶಿಫಾರಸ್ಸು ಮಾಡಲು ಮೇಲೆ ಓದಲಾದ-1ರ ಸರ್ಕಾರದ ಆದೇಶದಲ್ಲಿ ಒಂದು ತಜ್ಞರ ಸಮಿತಿ ರಚಿಸಲಾಗಿತ್ತು. ಮೇಲೆ ಓದಲಾದ-2ರಲ್ಲಿ, ನಿರ್ದೇಶಕರು, ವಾಲ್ಮಿ, ಧಾರವಾಡ ಹಾಗೂ ಸದಸ್ಯ ಕಾರ್ಯದರ್ಶಿ, ತಜ್ಞರ ಸಮಿತಿ ಇವರು ಸರ್ಕಾರಕ್ಕೆ ಪತ್ರ ಬರೆದು ಸಮಿತಿಗೆ ವಹಿಸಲಾದ ಕೆಲಸವನ್ನು ಒಂದು ತಿಂಗಳೊಳಗಾಗಿ ಮುಗಿಸಿ ಅಂತಿಮ ವರದಿಯನ್ನು ಸಲ್ಲಿಸಲು ಸಾಧ್ಯವಾಗುವುದಿಲ್ಲವೆಂದು, ಕಾರಣ ಅಂತಿಮ ವರದಿ ಸಲ್ಲಿಸಲು ದಿನಾಂಕ: 21.5.2005 ರವರೆಗೆ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ. ಆದುದರಿಂದ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 12 ಸಿಎಎಂ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿಷಯಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಜಸಂಇ 12 ಸಿಎಎಂ 2005 ದಿನಾಂಕ: 12.2.2005ರಲ್ಲಿ, ನೀರು ನಿರ್ವಹಣೆಯಲ್ಲಿ ರೈತರ ಪಾಲ್ಗೊಳ್ಳುವಿಕೆಯು ಪರಿಣಾಮಕಾರಿಯಾಗಲು ಹಾಗೂ ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ, ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಹಾಗೂ ಸರ್ಕಾರವು ಕೈಗೊಳ್ಳಬೇಕಾದ ನೀತಿಗಳ ಬಗ್ಗೆ ಶಿಫಾರಸ್ಸು ಮಾಡಲು ರಚಿಸಲಾದ ಸಮಿತಿಯು, ನೀಡಬೇಕಾಗಿರುವ ವರದಿಯ ಕಾಲಾವಕಾಶವನ್ನು ದಿನಾಂಕ: 21.05.2005 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ವಾಸುದೇವ ಹೆಬ್ಬಾರ್**

ಪಿ.ಆರ್.434

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ, (ಕಾಡಾ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 96(1) ದಿನಾಂಕ: 25.06.96.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 96, ದಿನಾಂಕ: 06.06.97.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 96, ದಿನಾಂಕ: 12.03.99.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 96, ದಿನಾಂಕ: 25.11.99.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 96, ದಿನಾಂಕ: 05.06.2000.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2001, ದಿನಾಂಕ: 12.11.2001.
7. ಜಲಸಂಪನ್ಮೂಲ ಇಲಾಖೆ (ಸೇವೆಗಳು-ಎ) ಶಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ನೀಇ 297 ಸೇಸಎ 99, ದಿನಾಂಕ: 22.11.2002. ಮತ್ತು 05.06.2003.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 72 ಸಸಿವಿ 2004 ದಿನಾಂಕ: 02.01.2004.
9. ಅನಧಿಕೃತ ಟಿಪ್ಪಣಿ ಸಂಖ್ಯೆ: ಸನೀಇ 56 ಸೇಎಸು 2004 ದಿನಾಂಕ: 20.1.2005.

**ಪ್ರಸ್ತಾವನೆ:**

ಸಣ್ಣ ನೀರಾವರಿ ಹಾಗೂ ಅಂತರ್ಜಲ ವಿಷಯಗಳನ್ನು ಪರಿಶೀಲಿಸುವ ಸಲುವಾಗಿ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕೆಳಕಂಡ ಹುದ್ದೆಗಳನ್ನು ದಿನಾಂಕ: 22.6.1996 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| ಅ. | ಕಾರ್ಯದರ್ಶಿ, ಸಣ್ಣ ನೀರಾವರಿ ಹಾಗೂ ಅಂತರ್ಜಲ (ಭಾರತೀಯ ಆಡಳಿತ ಸೇವೆ ಸೂಪರ್ ಟೈಂ ಸ್ಕೇಲ್ ಹುದ್ದೆ) | 1 ಹುದ್ದೆ |
| | ಆಪ್ತ ಸಿಬ್ಬಂದಿ | |
| ಅ) | ಶೀಘ್ರಲಿಪಿಗಾರರು | 2 ಹುದ್ದೆಗಳು |
| ಆ) | ಭಾಷಾಂತರಕಾರರು | 1 ಹುದ್ದೆ |
| ಇ) | ಕಿರಿಯ ಸಹಾಯಕರು | 1 ಹುದ್ದೆ |
| ಈ) | ಚಾಲಕರು | 1 ಹುದ್ದೆ |
| ಉ) | ದಲಾಯತ್ | 2 ಹುದ್ದೆಗಳು |

ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ, ಸಣ್ಣ ನೀರಾವರಿ ಹಾಗೂ ಅಂತರ್ಜಲ ಹುದ್ದೆಯ ಪದನಾಮವನ್ನು ಕಾರ್ಯದರ್ಶಿ (ಸಣ್ಣ ನೀರಾವರಿ) ನೀರಾವರಿ ಇಲಾಖೆ ಎಂದು (ಈಗಿನ ಜಲಸಂಪನ್ಮೂಲ ಇಲಾಖೆ) ದಿನಾಂಕ: 7.5.1997 ರಿಂದ ಜಾರಿಗೆ ಬರುವಂತೆ ಬದಲಾಯಿಸಿ, ಈ ಹುದ್ದೆಯನ್ನು ರಾಜ್ಯ ವೇತನ ಶ್ರೇಣಿ ರೂ.5825-175-6000-200-6800ರ ಪ್ರಧಾನ ಅಭಿಯಂತರರಿಂದ ನಿಯೋಜನೆ ಮೇಲೆ ತುಂಬಲು ಆದೇಶಿಸಲಾಗಿದೆ. ಹಾಗೂ ಸದರಿ ಹುದ್ದೆಗಳನ್ನು ದಿನಾಂಕ: 22.6.1997 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (3) (4) (5) ಹಾಗೂ (6)ರ ಸರ್ಕಾರದ ಆದೇಶಗಳಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕ: 21.06.2002 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾಗಿರುವ ಅಧಿಸೂಚನೆ ಸಂಖ್ಯೆ: ಸಿಆಸುಇ 361 ಎಸ್‌ಎಎಸ್ 2003, ದಿನಾಂಕ: 22.10.2003 ರಲ್ಲಿ ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ-ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹುದ್ದೆ ಎಂದು ಪದನಾಮೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ: 22.6.2002 ರಿಂದ ದಿನಾಂಕ: 31.12.2004 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಈ ಹುದ್ದೆಗಳನ್ನು ದಿನಾಂಕ: 1.1.2005 ರಿಂದ 2 ವರ್ಷಗಳವರೆಗೆ ಮುಂದುವರೆಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2005 ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2005**

ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಜಲಸಂಪನ್ಮೂಲ ಇಲಾಖೆ, ಈ ಹುದ್ದೆ ಹಾಗೂ ಕೆಳಕಂಡ ಆಪ್ತ ಸಿಬ್ಬಂದಿ ವರ್ಗವನ್ನು ದಿನಾಂಕ: 1.1.2005 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| ಅ. | ಕಾರ್ಯದರ್ಶಿ, ಸಣ್ಣ ನೀರಾವರಿ ಹಾಗೂ ಅಂತರ್ಜಲ (ಭಾರತೀಯ ಆಡಳಿತ ಸೇವೆ ಸೂಪರ್ ಟೈಂ ಸ್ಕೇಲ್ ಹುದ್ದೆ) | 1 ಹುದ್ದೆ |
| | ಆಪ್ತ ಸಿಬ್ಬಂದಿ | |
| ಅ) | ಶೀಘ್ರಲಿಪಿಗಾರರು | 2 ಹುದ್ದೆಗಳು |
| ಆ) | ಭಾಷಾಂತರಕಾರರು | 1 ಹುದ್ದೆ |
| ಇ) | ಕಿರಿಯ ಸಹಾಯಕರು | 1 ಹುದ್ದೆ |
| ಈ) | ಚಾಲಕರು | 1 ಹುದ್ದೆ |
| ಉ) | ದಲಾಯತ್ | 2 ಹುದ್ದೆಗಳು |

ಈ ಆದೇಶವನ್ನು ಸಂಖ್ಯೆ: ಆಇ 1 ಟಿಎಫ್‌ಪಿ/ 96 ದಿನಾಂಕ: 10.07.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್.438

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ, (ಸೇವೆಗಳು-2).

**ವಿಷಯ :** ಶ್ರೀ ಓ. ಕಿಶನ್‌ಚಂದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ವಿ. ವಿ. ಪುಣೇದ್ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಕ್ರಮಾಂಕ: ಸಿಆಸುಇ 131 ಎಸ್‌ಇಎನ್ 2002, ದಿನಾಂಕ: 3.4.2003.
2. ಶ್ರೀ ಓ. ಕಿಶನ್‌ಚಂದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ವಿ. ವಿ. ಪುಣೇದ್ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರುಗಳು ನೋಟೀಸಿಗೆ ಸಲ್ಲಿಸಿದ ದಿನಾಂಕ: 31.5.2003 ರ ಉತ್ತರ.
3. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 131 ಎಸ್‌ಇಎನ್ 2002, ದಿನಾಂಕ: 8.10.2003
4. ಶ್ರೀ ವಿ. ಪದ್ಮನಾಭ ಕೇದಿಲಾಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ದಿನಾಂಕ: 5.8.2004ರ ವಿಚಾರಣಾ ವರದಿ.

5. 2ನೇ ಕಾರಣ ಕೇಳುವ ಸೂಚನೆ ಸಂಖ್ಯೆ: ಸಿಆಸುಇ 131 ಎಸ್‌ಇಎನ್ 2002 ದಿನಾಂಕ: 30.08.2004.
6. ಶ್ರೀ ಓ ಕಿಶನ್‌ಚಂದ್, ಕೆ.ಎ.ಎಸ್. ರವರ ದಿನಾಂಕ: 11.10.2004ರ ಲಿಖಿತ ಉತ್ತರ.
7. ಶ್ರೀ ವಿ. ವಿ. ಫುಣೇದ್ ಕೆ.ಎ.ಎಸ್. ರವರ ದಿನಾಂಕ: 6.10.2004 ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯಲ್ಲಿ ಶ್ರೀ ಓ. ಕಿಶನ್‌ಚಂದ್, ಕೆಎಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರು ದಿನಾಂಕ: 10.11.1992 ರಿಂದ 10.5.1995 ರವರೆಗೆ ಹಾಗೂ ಶ್ರೀ ವಿ. ವಿ. ಫುಣೇದ್, ಕೆ.ಎ.ಎಸ್., (ಕಿರಿಯ ಶ್ರೇಣಿ) ಅಧಿಕಾರಿ ಅವರು ದಿನಾಂಕ: 22.05.1995 ರಿಂದ 23.08.1995 ರವರೆಗೆ ಮಂಡಳಿಯ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಓ. ಕಿಶನ್‌ಚಂದ್ ಅವರು 5 ಜನ ಅಭ್ಯರ್ಥಿಗಳನ್ನು ಹಾಗೂ ಶ್ರೀ ವಿ. ವಿ. ಫುಣೇದ್ ರವರು 3 ಜನ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳನ್ನು ಉಲ್ಲಂಘಿಸಿ ನೇಮಕ ಮಾಡಿದ ಆರೋಪಕ್ಕಾಗಿ ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ: 3.4.2003ರ ನೋಟೀಸ್ ನೀಡಿ ಸಮಜಾಯಿಷಿ ಕೇಳುವುದರ ಮೂಲಕ ಅವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸ್‌ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 31.05.2003ರ ಉತ್ತರ ಸಲ್ಲಿಸಿದ ಆರೋಪಿತರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆರೋಪಿತ ಅಧಿಕಾರಿಗಳ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿ ಇಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಆರೋಪಿತರುಗಳ ಮೇಲಿನ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿದ ಪ್ರಕರಣವು ಮೇಲೆ (3) ರಲ್ಲಿ ಓದಲಾದ ದಿನಾಂಕ: 8.10.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಎ. ಪದ್ಮನಾಭ ಕೆದಿಲಾಯ ನಿವೃತ್ತ ನ್ಯಾಯಾಧೀಶರು, ಅವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4) ರಲ್ಲಿ ಓದಲಾದ ದಿನಾಂಕ: 5.8.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ವರದಿಯ ಪ್ರಕಾರ ಆರೋಪಿತರ ಮೇಲಿನ ಎಲ್ಲಾ ಆರೋಪಗಳು ಸಾಬೀತಾಗಿದೆ ಎಂದು, ಇವರುಗಳು ಯಾವುದೇ ನಿಯಮಗಳನ್ನು ಪಾಲಿಸದೇ ಸರ್ಕಾರದ ಅನುಮತಿಯನ್ನು ಪಡೆಯದೇ ಕೇವಲ ಮಂಡಳಿಯ ಅಧಿಕಾರೇತರ ಅಧ್ಯಕ್ಷರ ಮತ್ತು ಸದಸ್ಯರ ಅನುಮೋದನೆಯನ್ನು ಪಡೆದು ನೇಮಕಾತಿ ಮಾಡಿರುವುದು ನಿಯಮ ಬಾಹಿರವೆಂದು ವಿಚಾರಣಾಧಿಕಾರಿಯು ತಿಳಿಸಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ: 30.08.2004ರ 2ನೇ ಕಾರಣ ಕೇಳುವ ನೋಟೀಸ್‌ನೊಡನೆ ವಿಚಾರಣಾ ವರದಿಯ ಪ್ರತಿಯನ್ನು ಅಪಾದಿತರಿಗೆ ಒದಗಿಸಿ ಅವರ ಹೇಳಿಕೆಗೆ ಅವಕಾಶ ಮಾಡಿಕೊಡಲಾಯಿತು. ಮೇಲೆ (6) ಮತ್ತು (7) ರಲ್ಲಿ ಓದಲಾದ ದಿನಾಂಕ: 6.10.2004 ಮತ್ತು 11.10.2004ರ ಅವರ ಪತ್ರಗಳಲ್ಲಿ ಲಿಖಿತ ವಿವರಣೆಯನ್ನು ಸಲ್ಲಿಸಿರುತ್ತಾರೆ.

ಇವರುಗಳ ವಿವರಣೆಯನ್ನು ಪರಿಶೀಲಿಸಲಾಗಿ 1984 ರಲ್ಲಿ ಹುದ್ದೆಗಳು ಮಂಜೂರಾಗಿದ್ದು ಈ ಪೈಕಿ ಕೇವಲ 5 ಹುದ್ದೆಗಳನ್ನು ಮಾತ್ರ ತುಂಬಿದ್ದು ಉಳಿದ 8 ಹುದ್ದೆಗಳು ಖಾಲಿಯಿದ್ದ ಪ್ರಯುಕ್ತ ಮಂಡಳಿಯ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟಾಗುತ್ತಿದ್ದು ಮಂಡಳಿಯ ಕೆಲಸಗಳ ಹಿತದೃಷ್ಟಿಯಿಂದ ಮತ್ತು ಈ ಹಿಂದೆ ಅವರ ಪೂರ್ವಾಧಿಕಾರಿಗಳು (ಮಂಡಳಿಯ ಕಾರ್ಯದರ್ಶಿಗಳು ಇದೇ ರೀತಿ ನೇಮಕಾತಿಗಳನ್ನು ಮಾಡಿದ್ದು ಅವುಗಳನ್ನು ಸರ್ಕಾರವು ಅನುಮೋದಿಸಿದ್ದು ಅದನ್ನೇ ತಾವು ಅನುಸರಿಸಿದ್ದಾಗಿ ತಿಳಿಸುತ್ತಾ ಈ ನೇಮಕಾತಿಗಳಿಗೆ ಕಚೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಿ ಸೂಕ್ತ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಮಂಡಳಿಯ ಗೊತ್ತುವಳಿ ಆದನಂತರ ನೇಮಕಾತಿ ಮಾಡಿರುವುದು ಸದುದ್ದೇಶದಿಂದ ಕೂಡಿದೆಯೆಂದು ಹಾಗೂ ಮಂಡಳಿಗೆ ಈ ತನಕ ವೃಂದ ಮತ್ತು ನೇಮಕಾತಿ ನಿಯಮಗಳು ರಚಿಸಿಲ್ಲದಿರುವುದರಿಂದ ಯಾವುದೇ ನಿಯಮಾವಳಿಗಳನ್ನು ಉಲ್ಲಂಘಿಸುವ ಪ್ರಶ್ನೆ ಇಲ್ಲವೆಂದು ಮನವಿ ಮಾಡಿದ್ದಾರೆ. ಇದಲ್ಲದೇ ಈ ನೇಮಕಾತಿಗಳು 1995 ರಲ್ಲಿ ಮಾಡಿದ್ದು ಅನಂತರ ಹಲವಾರು ಬಾರಿ ಆಡಿಟ್ ನಡೆದರೂ ಸಹ ಅದನ್ನು 2002 ವರ್ಷದ ತನಿಖೆಯಲ್ಲಿ ಮಾತ್ರ ಆಕ್ಷೇಪಿಸಿರುವುದು ಸರಿಯಲ್ಲವೆಂದು ಮತ್ತು ಸರ್ಕಾರವು ಈ ಹುದ್ದೆಗಳಿಗೆ ವೇತನ ಮತ್ತು ಭತ್ಯೆಗಳನ್ನು ಆಯವ್ಯಯದಲ್ಲಿ ಒದಗಿಸಿರುತ್ತದೆಂದು ಆದ್ದರಿಂದ ಅವರು ದೋಷಿಗಳಲ್ಲವೆಂದು ಮನವಿ ಮಾಡಿರುತ್ತಾರೆ.

ಆಪಾದಿತರ ಹೇಳಿಕೆಗಳನ್ನು ವಿಚಾರಣಾಧಿಕಾರಿಯವರ ವಿಚಾರಣಾ ವರದಿಯೊಂದಿಗೆ ಪರಿಶೀಲಿಸಲಾಯ್ತು. ಈ ಪ್ರಕರಣದಲ್ಲಿ ಆರ್ಥಿಕ ಇಲಾಖೆಯ ಮಿತವ್ಯಯ ಆದೇಶದಡಿ ಪೂರ್ವಾನುಮತಿಯನ್ನು ಪಡೆಯದೇ ಮತ್ತು ಹುದ್ದೆಗಳನ್ನು ತುಂಬುವ ಪ್ರಕ್ರಿಯೆಯನ್ನು ಸಾಕಷ್ಟು ಪ್ರಚಾರ ಮಾಡದೆ ನೇಮಿಸಿರುವುದು ಈ ಅಧಿಕಾರಿಗಳು ಎಸಗಿರುವ ದುರ್ನಡತೆಯಾಗಿರುತ್ತದೆ. ವಿಚಾರಣಾಧಿಕಾರಿಯವರು ತನ್ನ ವರದಿಯಲ್ಲಿ ಹೇಳಿರುವಂತೆ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲವೆಂಬ ವರದಿಯ ಹೇಳಿಕೆ ಇದ್ದರೂ, ಮಂಡಳಿಯ ಉಸ್ತುವಾರಿ ಜವಾಬ್ದಾರಿಯನ್ನು ಹೊತ್ತ ಹಿರಿಯ ಅಧಿಕಾರಿಗಳು ನಿಯಮಗಳನ್ನು ಸರಿಯಾಗಿ ಮಂಡಳಿಯ ಅಧ್ಯಕ್ಷರಿಗೆ ಸಲಹೆ ನೀಡಬಹುದಾಗಿತ್ತು. ಆದರೆ ಈ ಜವಾಬ್ದಾರಿಯನ್ನು ಸದರಿ ಆರೋಪಿತ ಅಧಿಕಾರಿಗಳು ನಿರ್ವಹಿಸಿರುವುದಿಲ್ಲವಾದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಆರೋಪಿತರಿಗೆ ದಂಡನೆ ವಿಧಿಸುವ ಬಗ್ಗೆ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 131 ಎಸ್‌ಇಎನ್, 02 ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಪ್ರಕರಣದ ಆರೋಪಿಗಳಿಗೆ ಸಂಬಂಧಿಸಿದಂತೆ ಈ ಮುಂದಿನಂತೆ ಆದೇಶಿಸುತ್ತದೆ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು.

1) ಶ್ರೀ ಓ. ಕಿಶನ್‌ಚಂದ್ ಕೆ. ಎ. ಎಸ್. ಅಧಿಕಾರಿ ರವರ ಮುಂದಿನ ಎರಡು (2) ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with Cumulative effect) ತಡೆಹಿಡಿಯಬೇಕೆಂದು
2) ಶ್ರೀ ವಿ. ವಿ. ಫುಣೇದ್, ಕೆ.ಎ.ಎಸ್., ಅಧಿಕಾರಿ ರವರ ಮುಂದಿನ ಎರಡು (2) ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with Cumulative effect) ತಡೆಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್.392

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಸಿಆಸುಇ, (ಸೇವೆಗಳು-3).

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು ಮತ್ತು ಟಿ. ನರಸೀಪುರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ ತಾಲ್ಲೂಕಿನ ಕೆಲವು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ಎಇ-4: ಹುಣಸೂರು ಪಟ್ಟಣ ರಸ್ತೆ ದಿನಾಂಕ: 19.01.05.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಸ್ತೆ ಶಾಖೆ: ಸಇಂ:8: 2004-05 ದಿನಾಂಕ: 10.03.05.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ತಾಲ್ಲೂಕು | ರಸ್ತೆಯ ಹೆಸರು | ಉದ್ದ ಕಿ.ಮೀ.ಗಳಲ್ಲಿ |
|---|---|---|
| | ಮುತ್ತುರಾಯನ ಹೊಸಹಳ್ಳಿ ಚಿಲಕುಂದ ರಸ್ತೆ | 4.50 |
| | ಜಡಗನಕೊಪ್ಪಲು ಹಗರನಹಳ್ಳಿ ರಸ್ತೆ. | 2.00 |
| | ಚೀಲಕುಂದ ಶೆಟ್ಟಿಹಳ್ಳಿ ರಸ್ತೆ | 6.00 |
| | ರತ್ನಪುರಿಯಿಂದ ಹೊಸವಾರಂಚಿ ರಸ್ತೆ ಮಾರ್ಗ ಕುಡಿನೀರು ಮುದ್ದನಹಳ್ಳಿ ರಸ್ತೆ. | 12.00 |
| | ಕೆ.ಎಂ.ಆರ್.ಎ. ರಸ್ತೆಯಿಂದ ಹರವೆ ಗ್ರಾಮಕ್ಕೆ ಸೇರುವ ರಸ್ತೆ ಮಾರ್ಗ ಚಿಟ್ಟಕ್ಯಾತನಹಳ್ಳಿ | 4.00 |
| | ಉಯಿಗೊಂಡನಹಳ್ಳಿಯಿಂದ ಅಂಬೇಡ್ಕರ್ ನಗರಕ್ಕೆ ಸೇರುವ ರಸ್ತೆ ಮಾರ್ಗ ಕರೀಕಲ್ಲು ದೊಡ್ಡಕೊಪ್ಪಲು | 5.00 |
| | ಅಸವಾಳು ಯಲಚಹಳ್ಳಿ ರಸ್ತೆ. | 4.00 |
| | ಚಲ್ಲಹಳ್ಳಿ ಹೊಸಪುರ ರಸ್ತೆ ಮಾರ್ಗ ತಿಪ್ಲೂರು | 6.00 |
| | ಹನಗೋಡುನಿಂದ ಹುಣಸೂರು ತಲಕಾವೇರಿ ರಸ್ತೆಗೆ ಸೇರುವ ರಸ್ತೆ ಮಾರ್ಗ ಹೆಮ್ಮಿಗ್ಗೆ. | 7.00 |
| ಹುಣಸೂರು | ದೊಡ್ಡ ಹೆಜ್ಜೂರು ನಿಂದ ನಲ್ಲೂರು ಪಾಲ ಮುರ್ಕಲ್ಲು ಸೇರುವ ರಸ್ತೆ ಮಾರ್ಗ ಭರತವಾಡಿ | 6.00 |
| | ಹನಗೋಡುನಿಂದ ಹುಣಸೂರು ಪಿರಿಯಾಪಟ್ಟಣ ಸೇರುವ ರಸ್ತೆ ಮಾರ್ಗ ಬಿ.ಆರ್. ಕಾವಲು | 6.50 |
| | ಶಿಂಡೇನಹಳ್ಳಿ ಗೇಟ್ ಮೇಗತ್ತೂರು ಕೊಳವಿಗೆ ರಸ್ತೆ. | 4.50 |
| | ಹುಣಸೂರು ಪಿರಿಯಾಪಟ್ಟಣ ರಸ್ತೆಯಿಂದ ಕೂಡ್ಲೂರು ಹೊಸೂರು ರಸ್ತೆ ಮಾರ್ಗ ಹೊನ್ನೇನಹಳ್ಳಿ ಬೀರನಹಳ್ಳಿ | 7.00 |
| | ಎಂ.ಬಿ. ರಸ್ತೆಯಿಂದ ಹುಣಸೂರು ತಲಕಾವೇರಿ ರಸ್ತೆಗೆ ಸೇರುವ ರಸ್ತೆ ಮಾರ್ಗ ಕಣಗಾಲು ಹರೀನಹಳ್ಳಿ ರಸ್ತೆ. | 6.00 |
| | ಹುಣಸೂರು ತಲಕಾವೇರಿ ರಸ್ತೆಯಿಂದ ಕಡೆಮನುಗನಹಳ್ಳಿ ಸೇರುವ ರಸ್ತೆ ಮಾರ್ಗ ಕರಣಕುಪ್ಪೆ ಬೀರತಮ್ಮನಹಳ್ಳಿ. | 5.00 |
| | ಹುಲ್ಲಾಳು ಶೀರೇನಹಳ್ಳಿ ರಸ್ತೆ ಮಾರ್ಗ ಗಾವಡಗೆರೆ ರಸ್ತೆ. | 7.00 |
| | ಹೆಜ್ಜೋಡ್ಲು ಬಿಳಿಗೆರೆ ರಸ್ತೆ | 6.50 |
| | ಕೆ.ಆರ್. ನಗರ ಮುಳ್ಳೂರು ತೊಂಡಾಳು ಅಗ್ರಹಾರ ಮಾರ್ಗ ಕಟ್ಟೆಮಳಲವಾಡಿ ರಸ್ತೆ. | 18.50 |
| | ಉಮ್ಮತ್ತೂರಿನಿಂದ ಅರಳಹಳ್ಳಿ ಮಾರ್ಗ ಹೊಸಪಂಚೋಳ್ಳಿ ಹಳೇಪೆಂಚೋಳ್ಳಿ ಭೂತಾಳೆ ಪೆಂಚೋಳ್ಳಿ ರಸ್ತೆ | 7.00 |
| | ಗುರುಪುರನಿಂದ ಕಾಳೇನಹಳ್ಳಿ ರಸ್ತೆ ಮಾರ್ಗ | 5.00 |
| | ಕಾಗೇನಹಳ್ಳಿ ಗೇಟ್‌ನಿಂದ ಚಲ್ಲಹಳ್ಳಿ ರಸ್ತೆ, | 5.00 |
| | ಉಲ್ಲೇನಹಳ್ಳಿ ಗೇಟ್‌ನಿಂದ ಮೂಡಲಕೊಪ್ಪಲು ರಸ್ತೆ | 4.00 |
| | ಗೊಮ್ಮಟಗಿರಿಯಿಂದ ಹಳೇಬೀಡು ರಸ್ತೆ | 4.00 |
| | ಎಂ. ಬಿ. ರಸ್ತೆಯಿಂದ ಎಮ್ಮೆಕೊಪ್ಪಲು ರಸ್ತೆ | 1.50 |
| | ಬಿ. ಕೆ. ರಸ್ತೆಯಿಂದ ಶಂಕಳ್ಳಿ ರಸ್ತೆ | 3.00 |
| | ತೆಂಕನಕೊಪ್ಪಲು ಬೋಳನಹಳ್ಳಿ ರಸ್ತೆ | 4.00 |
| | ಎದುನುಗನಹಳ್ಳಿ ಗೊಮ್ಮಟಗಿರಿ ರಸ್ತೆ | 5.20 |
| | ಎಂ.ಬಿ.ರಸ್ತೆ (ರಾಹೆ.88) ಸರಪಳಿ 47.40ನೇ ಕಿಮೀ.ನಿಂದ ಸದಾಶಿವನಕೊಪ್ಪಲು ಉಪವಿಭಾಗಾಧಿಕಾರಿಗಳ ವಸತಿಗೃಹ ಮಾರ್ಗ ಹುಣಸೂರು ಬೈಪಾಸ್‌ಗೆ ಸೇರುವ ರಸ್ತೆ. | 0.60 |
| | ಎಂ.ಬಿ.ರಸ್ತೆ (ರಾಹೆ.88) ಸರಪಳಿ 46.825 ನೇ ಕಿಮೀ.ನಿಂದ (ಹಳೇಸೇತುವೆ) ನಿಂದ ಹುಣಸೂರು ಬೈಪಾಸ್‌ಗೆ ಸ.46.70 ಕಿಮೀ (ಹೊಸ ಸೇತುವೆ)ನಲ್ಲಿ ಸೇರುವ ರಸ್ತೆ. | 0.55 |
| | ಎಂ.ಬಿ. ರಸ್ತೆ (ರಾ.ಹೆ.88) ಸರಪಳಿ 46.25ನೇ ಕಿಮೀ ನಿಂದ ಮಸೀದಿ ಮಾರ್ಗ (ಬಜಾರ್ ರಸ್ತೆ) ಶಿಕ್ಷಕರ ಭವನ ಹುಣಸೂರು ಕಾಫಿವರ್ಕ್ಸ್ ರಸ್ತೆಗೆ ಸೇರುವ ರಸ್ತೆ. | 0.55 |
| | ರಾಮನಗರ ಕೂನಗಲ್ ರಸ್ತೆ | 8.00 |
| | ಮಾಯಗಾನಹಳ್ಳಿಯಿಂದ ಸುಗ್ಗನಹಳ್ಳಿ ಬೆಜ್ಜಗರಹಳ್ಳಿ ರಸ್ತೆ | 10.00 |
| ರಾಮನಗರ | ಬಿಡದಿಯಿಂದ ಕಾಕರಾಮನಹಳ್ಳಿ ರಸ್ತೆ | 6.00 |
| | ಮೈಸೂರು ಬೆಂಗಳೂರು ರಸ್ತೆಯಿಂದ ಶಾನಮಂಗಲ ಮಾರ್ಗವಾಗಿ ಕನಕಪುರಕ್ಕೆ ಸೇರುವ ರಸ್ತೆ. | 10.00 |
| ಟಿ. ನರಸೀಪುರ | ರಾಷ್ಟ್ರೀಯ ಹೆದ್ದಾರಿ 112 ರಿಂದ ನಂಜನಗೂಡು ಟಿ. ನರಸೀಪುರ ರಸ್ತೆ ಸೇರುವ ರಸ್ತೆ ಮಾರ್ಗ ಮೂಗೂರು ಬನ್ನಹಳ್ಳಿ. | 6.40 |

